ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 03 ನೇ ಮಾರ್ಚ್, 2020

IDS MT ಯೋಜನೆಯಡಿ ನಿವೇಶನಗಳನ್ನು ನೀಡಿರುವ ಬಗ್ಗೆ

ಶ್ರೀ ಕಾಂತರಾಜ್ (ಬಿ.ಎಂ.ಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

124 (66) ಮಾನ್ಯ ನಗರಾಭಿವೃದ್ಧಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ತುಮಕೂರು ಮಹಾನಗರ ಪಾಲಿಕೆ ವ್ಯಾಪ್ತಿಗೆ ಒಳಪಡುವ ಐ.ಡಿ.ಎಸ್.ಎಂ.ಟಿ. ಯೋಜನೆಯಡಿ ಯಾವ ಯಾವ ಬಡಾವಣೆಗಳಲ್ಲಿ ನಿವೇಶನಗಳನ್ನು ನಿರ್ಮಿಸಿ ವಿಂಗಡಿಸಲಾಗಿದೆ;

(ಆ) ಆಯಾ ಬಡಾವಣೆಗಳಲ್ಲಿ ಸದರಿ ಯೋಜನೆಯಡಿ ವಿಂಗಡಿಸಿ ಹಂಚಿಕೆಯಾಗದೆ ಉಳಿದಿರುವ ನಿವೇಶನಗಳ ಸಂಖ್ಯೆ ಎಷ್ಟು ; (ಯಾವ ಯಾವ ಅಳತೆಯ ಎಷ್ಟೆಷ್ಟು ನಿವೇಶನಗಳಿವೆ ಎಂಬ ಬಗ್ಗೆ ಸಂಪೂರ್ಣ ಮಾಹಿತಿ ನೀಡುವುದು)

(ಇ) ಸದರಿ ಯೋಜನೆಯಡಿ ನಿವೇಶನಗಳನ್ನು ಯಾವ ಯಾವ ವರ್ಗದವರಿಗೆ ಎಷ್ಟು ದರವನ್ನು ನಿಗದಿಪಡಿಸಿ ಹಂಚಿಕೆ ಮಾಡಲಾಗಿದೆ ; (ಕಳೆದ ಐದು ವರ್ಷಗಳಿಂದ ಇಲ್ಲಿಯವರೆಗೆ ಹಂಚಿಕೆಯಾದ ನಿವೇಶನಗಳ ಮಾಹಿತಿ ನೀಡುವುದು)

(ಈ) ಐ.ಡಿ.ಎಸ್.ಎಂ.ಟಿ. ಯೋಜನೆಯಡಿ ಉಳಿದಿರುವ ನಿವೇಶನವನ್ನು ಯಾವ ಮಾನದಂಡವನ್ನು ಅನುಸರಿಸಿ ಯಾವಾಗ ಹಂಚಿಕೆ ಮಾಡಲಾಗುವುದು? (ವಿವರ ನೀಡುವುದು)